**ಹಲಧರ** – ವಾಸುದೇವಸಹೋದರ, ಬಲರಾಮ (ಪದೆದೆಜಿಗಿ ಹಲಧರಂ ತ್ರಿಃಪ್ರದಕ್ಷಿಣಂಗೆಯ್ದು ಸೇಸೆಗೊಂಡು: **ಶಾಂತಿಪು,** ೧. ೮೨)

**ಹಾಮಾದಂಡ** – ವಾಗ್ದಂಡ: ಹಾ, ಮಾ ಎಂಬ ಶಬ್ದಗಳನ್ನು ಹೇಳುವುದರ ಮೂಲಕ ಕೊಡುತ್ತಿದ್ದ ಶಿಕ್ಷೆ (ಕ್ರಮದಯ್ವರಿಂದೆ ಹಾದಂಡಮಯ್ವರುಂ ಮನುಗಳಿಂದೆ ಹಾಮಾದಂಡಂ ಸಮನಿಸೆ: **ಪಂಪರಾ,** ೧. ೮೯)

**ಹಾಮಾಧಿಕ್ಕಾರದಂಡ** – ಹಾಮಾದಂಡ (ಮತ್ತಮಯ್ವರ್ ಹಾಮಾಧಿಕ್ಕಾರದಂಡಮಂ ಮಾಡಿದರ್: **ಚಾವುಂಪು,** ಪು. ೧೬೭. ಸಾ. ೩–೪)

**ಹಾಸ್ಯ** – ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ಹಿಂಸಾನಂದ** – ನಾಲ್ಕು ಬಗೆಯ ರೌದ್ರಧ್ಯಾನದಲ್ಲಿನ ಮೊದಲನೆಯ ಬಗೆ, ಇತರರಿಗೆ ಪೀಡೆಯನ್ನುಂಟುಮಾಡುವುದರಲ್ಲಿಯೇ ಸಂತೋಷಪಟ್ಟು ಸದಾ ಪರೋಪದ್ರವದ ಧ್ಯಾನದಲ್ಲಿರುವುದು (ಸಂರಂಭ ಸಮಾರಂಭಾರಂಭ ಲಕ್ಷಣವಾಗಿ ಪರಪೀಡಾಸ್ವರೂಪಮುಮಪ್ಪ ಹಿಂಸೆಯೊಳತ್ಯರ್ಥ ಸಂಕಲ್ಪಾಧ್ಯಸಾನಂ ಹಿಂಸಾನಂದಮೆಂಬ ಪ್ರಥಮರೌದ್ರಂ: **ಚಾವುಂಡಜಯ,** ಪು ೩೮೫)

**ಹಿಮಾಂಶು** – ನಯನಾಗ್ನಿ ಕಷಾಯ ಹೃಷಿಕ ಷಣ್ಮುನಿ ಕ್ರಮನರಕಂಗಳ್ – ಅಸಜ್ಞಿಜೀವ, ಸರೀಸೃಪ, ಪಕ್ಷಿ, ಹಾವು, ಸಿಂಹ, ಲಲನಾಜನ ಹಾಗೂ ಮನುಷ್ಯರು ಕ್ರಮವಾಗಿ ಜೀವಿಸುವ ಒಂದರಿಂದ ಏಳರವರೆಗಿನ ನರಕಗಳ ಕ್ರಮ [ಚಂದ್ರ–೧ ನಯನ–೨ ಅಗ್ನಿ–೩ ಕಷಾಯ–೪ ಇಂದ್ರಿಯ–೫ ಷಟ್–೬ ಮತ್ತು ಮುನಿ–೭] (ಹಿಮಾಂಶು ನಯನಾಗ್ನಿ ಕಷಾಯ ಹೃಷೀಕ ಷಣ್ಮುನಿ ಕ್ರಮನರಕಂಗಳೊಳ್ ನೆಲಸುಗುಂ: **ಆದಿಪು,** ೫. ೯೪)

**ಹಿರಣ್ಯಗರ್ಭ** – ಆದಿ ತೀರ್ಥಂಕರ (ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ ಪಿರಿದಚ್ಚರಿಯೆನೆ ಹಿರಣ್ಯಗರ್ಭನ ನಿರುಪಮ ಗರ್ಭಾವತರಣ ಮಂಗಳವಿಧಿಯೊಳ್: **ಆದಿಪು,** ೭. ೨೬)

**ಹಿರಣ್ಯೋತ್ಕೃಷ್ಟಜನ್ಮತಾ** – ಒಂದು ಗರ್ಭಾನ್ವಯಕ್ರಿಯೆ, ಜಿನಜನನಿಯ ಗರ್ಭದಲ್ಲಿ ಅವತರಿಸುವುದು (ದಾನಸುಖೋದಯ ಇಂದ್ರತ್ಯಾಗ ಅವತಾರ ಹಿರಣ್ಯ ಗರ್ಭೋತ್ಕೃಷ್ಟಜನ್ಮತಾ ... ಎಂಬ ಅಂಬ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಹುಂಡಸಂಸ್ಥಾನ** – ಶರೀರದ ಅವಯವಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ (ಅಜಿಯದ ಬಾಲಂ ಬೀದಿಯ ಹಜಿಮಣ್ಣಿಂ ಮಾಡಿದೊಂದು ಹಾಹೆಯು ತೆಱದಿಂ ತಱಬಱಿಕಂ ವಿಕಟಾಕೃತಿ ನೆಱೆ ನಿಷ್ಠುರನಿವೃತ ಹುಂಡಸಂಸ್ಥಾನಂಗಳ್: **ಶಾಂತೀಶ್ವಪು,** ೯. ೧೦೭)

**ಹುಂಡಾವಸರ್ಪಿಣಿ** – ಅನೇಕ ಅವಸರ್ಪಿಣಿಗಳ ನಂತರ ಬರುವ ಕಾಲಾವಧಿ, ಶರೀರದ ಅಂಗೋಪಾಂಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ (ಅತಿಭಂಗಂ ದೊರೆಕೊಂಡುದಿಂದು ಭರತೇಶ್ವರಂಗೆ ಹುಂಡಾವಸರ್ಪಿಣೀ ವಿಳಸನದಿಂ: **ಆದಿಪು,** ೧೪. ೧೧೪)

**ಹೇತಿವಿದಾರಣಿ** – ಒಂದು ವಿದ್ಯೆ (ಸೌಜನ್ಯ ಕಂದಾಂಕುರಂ ಶ್ರೀವಿಜಯಂಗೆ ಹೇತಿ ವಿದಾರಣಿಯುಂ ಬಂಧವಿಮೋಚಿನಿಯುಮೆಂಬಿದೆರಡು ವಿದ್ಯೆಗಳಂ ಕೊಟ್ಟು; **ಶಾಂತಿಪು,** ೬. ೩೭ ವ)

**ಹೇಯ** – ತತ್ತ್ವದ ಎರಡು ಬಗೆಗಳಲ್ಲಿ ಒಂದು, ಸಂಸಾರಕಾರಣವಾದುದು (ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ ಸಂಸಾರ ಕಾರಣಂಗಳ್ ಹೇಯಂಗಳ್: **ಆದಿಪು,** ೧೦. ೬೩ ವ); ಕ್ಷುಲ್ಲಕ (ಹೇಯಮನಱಿದುಂ ರಾಜ್ಯಮನೀಯಲ್ ಅಪೇಕ್ಷಿಸುವಿರೆನೆ ನೀವೊಲ್ಲದುದಂ ಶ್ರೇಯಸ್ಕರಮಲ್ಲದುದಂ ಹೇಯಂ ಉಪಾದೇಯಂ ಎನಗದೆಂತಾದಪುದೋ: **ಪಂಪರಾ,** ೬. ೧೨೭)

**ಹೈಮವತಕ್ಷೇತ್ರ** – ಜಂಬೂದ್ವೀಪದ ಏಳು ಜನಪದಗಳಲ್ಲಿ, ಈ ಕ್ಷೇತ್ರದ ದಕ್ಷಿಣಕ್ಕೆ ಹಿಮವತ್ಪರ್ವತವೂ ಉತ್ತರಕ್ಕೆ ಮಹಾಹಿಮವತ್ಪರ್ವತವೂ ಪೂರ್ವಪಶ್ಚಿಮಸಮುದ್ರಗಳೂ ಇರುತ್ತವೆ; ಇದು ಜಘನ್ಯಭೋಗಭೂಮಿ ಒಂದು (ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತೈರಾವತಗಳೆಂಬೇೞು ಜನಪದಂಗಳಿಂದಂ: **ಆದಿಪು,** ೧. ೪೮ ವ)

**ಹೈರಣ್ಯವತ** – ಏಳು ಜನಪದಗಳಲ್ಲಿ ಒಂದು, ಒಂದು ಜಘನ್ಯಭೋಗಭೂಮಿ, ರುಕ್ಮಿ ಮತ್ತು ಶಿಖರಿಪರ್ವತಗಳ ಮತ್ತು ಪೂರ್ವಪಶ್ಚಿಮ ಸಮುದ್ರಗಳ ನಡುವಿನ ಕ್ಷೇತ್ರ (ಹೈಮವತ ಹೈರಣ್ಯವತಂಗಳೆಲ್ಲಂ ಜಘನ್ಯಭೋಗಭೂಮಿಗಳಕ್ಕುಂ: **ಚಂದ್ರಪ್ರಪು,** ೩. ೩೨ ವ)

**ಹೋಸವ್ರತ** – ರಾತ್ರಿ ಊಟಮಾಡದೇ ಇರುವ ವ್ರತ (ಅಣುವ್ರತ ಗುಣವ್ರತ ಶಿಕ್ಷಾವ್ರತಗಳೆಂಬ ಪನ್ನೆರಡುಂ ವ್ರತಂಗಳಂ ಹೋಸವ್ರತಂಬೆರಸು ನಡೆಯಿಪುದು: **ಧರ್ಮಪ,** ೧೦. ೬೨ ವ)

**ಹ್ರೀ** – ಜಿನಜನನಿಯನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

*****



ಹಳಗನ್ನಡ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಕನ್ನಡದ ಚಂಪೂ ಕಾವ್ಯಗಳಲ್ಲಿ ಬಳಕೆಗೊಂಡ ಜೈನ ಪರಿಭಾಷೆಯ ಕೋಶವೊಂದನ್ನೇಕೆ ಸಿದ್ಧಪಡಿಸಬಾರದು ಎಂಬ ಆಲೋಚನೆ ಬಂದುದರ ಫಲವೇ ಪ್ರಸ್ತುತ 'ಕನ್ನಡ ಚಂಪೂ–ಜೈನ ಪರಿಭಾಷೆ' ಎಂಬ ಈ ಕೃತಿ. ಬಹುತೇಕ ಕನ್ನಡ ಚಂಪೂ ಜೈನ ಪುರಾಣಗಳ ಜೊತೆಗೆ, ಜೈನ ಪರಿಭಾಷೆಯ ಶ್ರೀಮಂತ ಆಕರಗಳಾದ 'ವಡ್ಡಾರಾಧನೆ' ಮತ್ತು 'ಚಾವುಂಡರಾಯ ಪುರಾಣ'ಗಳನ್ನೂ ಈ ಕೋಶದ ಸಿದ್ಧತೆಯಲ್ಲಿ ಬಳಸಿಕೊಳ್ಳಲಾಗಿದೆ. ಇದುವರೆಗೆ ಎಷ್ಟೋ ಜೈನ ಪರಿಭಾಷಾ ವಿವರಣೆಗಳು ಹೊರಬಂದಿವೆ. ಆದರೆ ಗಮನವಿದ್ದುದು ಪರಿಭಾಷೆಗಿಂತ ಹೆಚ್ಚಾಗಿ ಚಂಪೂ ಕಾವ್ಯಗಳ, ಅದರಲ್ಲಿಯೂ ಜೈನಪುರಾಣ ಕಾವ್ಯಗಳ ಅಧ್ಯಯನದಲ್ಲಿ ಪರಿಭಾಷೆ ನಡುವೆ ಒಂದು ಸಾಮಾನ್ಯ ಓದುಗರ ಕಾವ್ಯಾನುಸಂಧಾನಕ್ಕೆ ತೊಡಕುಂಟುಮಾಡುವ ಅಂಶ. ಆ ತೊಡಕನ್ನು ಈ ನನ್ನ ಪ್ರಯತ್ನದಿಂದ ಸಾಕಷ್ಟು ಮಟ್ಟಿಗೆ ನಿವಾರಿಸಬಹುದಲ್ಲ ಎಂಬುದರ ಕಡೆಗೆ ಇಲ್ಲಿನ ಗಮನ; ಅದು ನೆರವೇರಿದರೆ ಸಿದ್ಧಪಡಿಸಿದವನ ಶ್ರಮ ಸಾರ್ಥಕವಾದಂತೆ.

– ಡಾ|| ಪಿ. ವಿ. ನಾರಾಯಣ



ಹೇಮಂತ ಸಾಹಿತ್ಯ
ರಾಜಾಜಿನಗರ, ಬೆಂಗಳೂರು-10